# ನಾನು ಜೇನ್ ಗುಡಾಲ್

ಲೇಃ ಬ್ರ್ಯಾಡ್ ಮೆಲ್ಟ್ಝರ್
ಚಿತ್ರಃ ಕ್ರಿಸ್ಟೋಫರ್ ಎಲಿಯೋಪೌಲೋಸ್



ಜೇನ್ ಗುಡಾಲ್ ಚಿಕ್ಕದಿನಿಂದಲೂ ಪ್ರಾಣಿಗಳನ್ನು – ನಾಯಿ, ಹೂದೋಟದಲ್ಲಿಯ ಕ್ರಿಮಿ-ಕೀಟಕಗಳು, ಅವಳ ನೆಚ್ಚಿನ ಜುಬಿಲಿ ಚಿಂಪಾಂಝಿ ಗೊಂಬೆ ಮುಂತಾದವುಗಳನ್ನು - ಪ್ರೀತಿಸುತ್ತಿದ್ದಳು. ಅವಳು ದೊಡ್ಡವಳಾಗುತ್ತಿದ್ದಂತೆ ಅವಳಿಗೆ ನಿಸರ್ಗದಲ್ಲಿಯ ಎಲ್ಲ ಪ್ರಾಣಿಗಳ ಬಗ್ಗೆ ತಿಳಿದುಕೊಳ್ಳುವ ಹಂಬಲ. ಆದ್ದರಿಂದಲೇ ಅವಳು ಆಫ್ರಿಕೆಯಲ್ಲಿಯ ದಟ್ಟವಾದ ಅರಣ್ಯದಲ್ಲಿ ಮನೆ ಮಾಡಿದಳು. ಅರಣ್ಯದಲ್ಲಿಯೇ ವಾಸ ಮಾಡಿಕೊಂಡಿರುವ ಚಿಂಪಾಂಝಿಗಳ ಅಭ್ಯಾಸವನ್ನು ಅವಳು ಮಾಡಿದಳು. ಈ ಅಭ್ಯಾಸಕ್ಕಾಗಿ ಆ ಕಾಡು ಪ್ರಾಣಿಗಳ ವಿಶ್ವಾಸವನ್ನು ಪಡೆಯುವ ಮೊದಲನೆಯ ವ್ಯಕ್ತಿಯೆಂದು ಅವಳನ್ನು ಪರಿಗಣಿಸಲಾಯಿತು. ಇಂದು ಜಗತ್ತು ಅವಳನ್ನು ಪ್ರಾಣಿ ಶಾಸ್ತ್ರಜ್ಞ, ಪರಿಸರ ತಜ್ಞ ಮತ್ತು ಪ್ರಾಣಿಗಳ ಹಕ್ಕುಗಳಿಗಾಗಿ ಹೋರಾಟ ಮಾಡುವ ಮಹಿಳೆ ಎಂದು ಗುರುತಿಸುತ್ತದೆ. ಅವಳ ಈ ಚರಿತ್ರೆ ಮಕ್ಕಳಿಗೆಲ್ಲರಿಗೂ ಸ್ಫೂರ್ತಿ ಕೊಡಬಹುದು. ಮತ್ತು ಇಂತಹ ಪುಸ್ತಕ ತಮ್ಮ ಮನೆಯಲ್ಲಿ ಕೂಡ ಇರಬೇಕೆಂದು ಅನ್ನಿಸಬಹುದು.



# ನಾನು ಜೇನ್ ಗುಡಾಲ್



ಲೇಃ ಬ್ರ್ಯಾಡ್ ಮೆಲ್ಟ್ಸರ್
ಚಿತ್ರಃ ಕ್ರಿಸ್ಟೋಫರ್ ಎಲಿಯೋಪೌಲೋಸ್

ಕನ್ನಡಕ್ಕೆಃ ಪ್ರಭಾಕರ ನಾನಾವಟಿ


ನಾನು ಜೇನ್ ಗುಡಾಲ್
!


ನನ್ನ ಮೊದಲ ಹುಟ್ಟುಹಬ್ಬದ ದಿನ ನನ್ನ ತಂದೆ ಚಿಂಪಾಂಝಿಯ ಆಟಿಗೆಯನ್ನು ತಂದುಕೊಟ್ಟರು ಅದಕ್ಕೆ ನಾನು ಜುಬಿಲಿ ಎಂದು ಹೆಸರಿಟ್ಟೆ..
.
ಜುಬಿಲಿ, ಜೇನ್ ನ್ನು ಭೆಟ್ಟಿಯಾಗು!
ನಾನು ಜುಬಿಲಿಯನ್ನು ಪ್ರೀತಿಸುತ್ತೇನೆ. ನಿಜವಾಗಿಯೂ! ಪ್ರೀತಿಸುತ್ತೇನೆ


ನಾನು ಹೋದಲ್ಲೆಲ್ಲ ಜುಬಿಲಿಯನ್ನು ನನ್ನ ಜೊತೆ ಕರೆದುಕೊಂಡು ಹೋಗುತ್ತಿದ್ದೆ.
ನಾನು ಸ್ವಲ್ಪ ದೊಡ್ಡವಳಾದಾಗ ನಾನು ಎಲ್ಲ ಆಟಿಗೆಗಳನ್ನು ಸಾಲಾಗಿ ನಿಲ್ಲಿಸಿ ಟೀಚರ ಟೀಚರ ಎಂಬ ಆಟವಾಡುತ್ತಿದ್ದೆ. ಆಗಲೂ ಕೂಡ ಜುಬಿಲಿಗೆ ಮಾತ್ರ ಕುಳಿತುಕೊಳ್ಳಲು ಖುರ್ಚಿ ಇರುತ್ತಿತ್ತು.
ಮಕ್ಕಳೇ, ಮೊಲಗಳಿಗೆ ತಿನ್ನಲು ಏನು ಸೇರುತ್ತದೆ ಎಂಬುದನ್ನು ಯಾರು ಹೇಳಬಲ್ಲಿರಿ?
ಜುಬಿಲಿ ಹೇಳು
ಸರಿ ಉತ್ತರ... ಎಂದಿನಂತೆ.


ನಾನು ನನ್ನ ಚಿಂಪಾಂಝಿ ಗೊಂಬೆಯನ್ನಷ್ಟೇ ಅಲ್ಲ, ಉಳಿದ ಪ್ರಾಣಿಗಳನ್ನೆಲ್ಲ ಕೂಡ ಪ್ರೀತಿಸುತ್ತಿದ್ದೆ. ಹೂದೋಟದಲ್ಲಿಯ ಮಳೆಹುಳಗಳನ್ನು ಕೂಡ!
"ಮಳೆಹುಳಗಳನ್ನು ಮನೆಯೊಳಗೆ ತಂದಿರುವೆಯಾ?"
ಚಿಂತೆ ಮಾಡಬೇಡಮ್ಮ.
ಅವು ಸುರಕ್ಷಿತವಾಗಿವೆ."


ತಲೆದಿಂಬಿನ ಕೆಳಗೆ
"ಹುಳಗಳು ಹೂದೋಟದಲ್ಲಿ ಸುರಕ್ಷಿತವಾಗಿರುತ್ತವೆ, ಮನೆಯಲ್ಲಿ ಅಲ್ಲ." ತಾಯಿ ಹೇಳಿದಳು.
ನಾವು ಆಮೇಲೆ ಮಳೆಹುಳಗಳನ್ನು ಹೂದೋಟದಲ್ಲಿ ಬಿಟ್ಟುಬಂದೆವು.

ಐದು ವರುಷದವಳಿದ್ದಾಗ 'ನನಗೆ ಕೋಳಿಗಳು ತತ್ತಿ ಹೇಗೆ ಹಾಕುತ್ತವೆ' ಎಂಬುದರ ಬಗ್ಗೆ ಕುತೂಹಲವಿತ್ತು. ಆದ್ದರಿಂದ ಒಂದು ದಿನ ನಾನು ಅಜ್ಜಿಯ ಹಿತ್ತಲಲ್ಲಿದ್ದ ಕೋಳಿಗೂಡಿನಲ್ಲಿ ಅಂಬೇಗಾಲಿಡುತ್ತ ಒಳಗೆ ಹೋಗಿ ನೀರಿಕ್ಷಿಸತೊಡಗಿದೆ.
ಮೊದಲು ನನ್ನನ್ನು ನೋಡಿ ಕೊಳಿಯು ಅಂಜತೊಡಗಿತು.



ನಾನು ಒಂದು ಮೂಲೆಯಲ್ಲಿ ಹೋಗಿ ನಿಲ್ಲಬೇಕೆಂದು ನಿರ್ಧರಿಸಿದೆ. ಆದರೆ ನಾನು ಸ್ವಲ್ಪ ಸರಿದರೆ ಕೋಳಿ ಹೊರಗೆ ಓಡಬಹುದಾಗಿತ್ತು. ಆದ್ದರಿಂದ ನಾನು ಅಲ್ಲಿಯೇ ಕುಳಿತು ಬಿಟ್ಟೆ.





ಕೊನೆಗೆ ಎಷ್ಟೋ ಹೊತ್ತಿನ ನಂತರ ನನಗೆ ಏನು ನೋಡಬೇಕಾಗಿತ್ತೋ ಅದು ಕಂಡಿತು.
ಕೋಳಿ ಒಂದಿಷ್ಟು ತೇಕಿದಂತೆ ಮಾಡಿದಾಗ ....






ಪ್ರಾಣಿಗಳಂತೆ ನನಗೆ ನಿಸರ್ಗ ಕೂಡ ಬಹಳ ಸೇರುತ್ತಿತ್ತು. ಚೆಸ್ಟನಟ್ ಗಿಡಕ್ಕೆ ನಾನು 'ನೂಕಿ' ಎಂದು ಕರೆಯುತ್ತದೆ. ಬೀಚ ಗಿಡಕ್ಕೆ 'ಬೀಚ' ಎಂದು... ಬೀಚ ಗಿಡ ನನ್ನ ಪ್ರೀತಿಯ ಗಿಡ.

"ನನಗೆ ನಿನ್ನ ನೆರಳಿನಲ್ಲಿ ಕುಳಿತು ಓದಲು ಕೊಟ್ಟಿದ್ದಕ್ಕಾಗಿ ತುಂಬಾ ಥ್ಯಾಂಕ್ಸ್!".

ಓಹ್! ಓದುವದು ಕೂಡ ನನ್ನ ಪ್ರೀತಿಯ ವಿಷಯ.

ಹಾಗೆ ನೋಡಿದರೆ ನನ್ನ ತಂದೆ-ತಾಯಿಯ ಹತ್ತಿರ ಸಾಕಷ್ಟು ದುಡ್ಡಿರಲಿಲ್ಲ. ಪುಸ್ತಕ ಬೇಕಾದರೆ ವಾಚನಾಲಯಕ್ಕೆ ಹೋಗ ಬೇಕಾಗುತ್ತಿತ್ತು.

ನಾನು ಏಳು ವರುಷದವಳಿದ್ದಾಗ ನನ್ನ ಇಡೀ ಜೀವನವನ್ನೇ ಬದಲಾಯಿಸಿದ ಒಂದು ಪುಸ್ತಕ ನನಗೆ ದೊರೆಯಿತು.



ಅದರ ಹೆಸರು 'ದಿ ಸ್ಟೋರಿ ಆಫ್ ಡಾಕ್ಟರ ಡುಲಿಟಲ್' ಅದನ್ನು ಒಮ್ಮೆ ಓದಿದೆ. ಮತ್ತೊಮ್ಮೆ ಓದಿದೆ. ವಾಚನಾಲಯಕ್ಕೆ ತಿರುಗಿ ಕೊಡುವ ಮೊದಲು ಮೂರನೇಯ ಸಲ ಕೂಡ ಓದಿದೆ.
ಒಬ್ಬ ವಿಚಿತ್ರ ಮನುಷ್ಯ ಮತ್ತು ಪ್ರಾಣಿಗಳ ಬಗ್ಗೆ ಆ ಕತೆ ಇತ್ತು.

ಪುಸ್ತಕದಲ್ಲಿಯ ಒಂದು ಗಿಳಿ 'ನಿಮಗೆ ಪ್ರಾಣಿಗಳ ಭಾಷೆ ತಿಳಿದುಕೊಳ್ಳ ಬೇಕಿದ್ದರೆ ನಿಮ್ಮ ಹತ್ತಿರ "ನಿರೀಕ್ಷಣ ಶಕ್ತಿ" ಇರಲೇಬೇಕು'.ಎಂದು ಹೇಳುತ್ತಿತ್ತು

ನನಗೆ ಆ ಪುಸ್ತಕದಲ್ಲಿಯ ಡಾ ಡುಲಿಟಲ್ ನನ್ನು ಪ್ರಾಣಿಮಿತ್ರರು ಬೆನ್ನಟ್ಟಿದಾಗ ಅವರು ಗುಡ್ಡದ ಅಂಚೆಗೆ ಮುಟ್ಟಿದ ಭಾಗ ಬಹಳ ಸೇರುತ್ತಿತ್ತು.

“ಇದನ್ನು ಹೇಗೆ ದಾಟುವದು?”






ಮಂಗಗಳೆಲ್ಲ ಸಾಲಾಗಿ ನಿಂತು ಒಬ್ಬರಿಗೊಬ್ಬರ ಕೈಗಳಿಂದ ಬಾಲ ಹಿಡಿದು ಸೇತುವೆ ಕಟ್ಟಿದರು. 'ಎಲ್ಲರೂ ಕೂಡಿ ಕೆಲಸ ಮಾಡಿದರೆ ಏನು ಬೇಕೋ ಅದನ್ನು ಸಾಧಿಸಬಹುದು.'

ಆ ಪುಸ್ತಕ ಓದಿದ ನಂತರ ನಾನು ಆಫ್ರಿಕೆಯ ಅರಣ್ಯದಲ್ಲಿ ಪ್ರಾಣಿಗಳ ಜೊತೆ ಇರುವದನ್ನು ನಿಶ್ಚಯಿಸಿದೆ.

ಹನ್ನೆರಡು ವರುಷದವಳಿದ್ದಾಗ ಅಲಿಗೇಟರ್ ಕ್ಲಬ್ ಎಂಬ ನನ್ನದೇ ಒಂದು ಕ್ಲಬ್ ನ್ನು ನಾನು ಸ್ಥಾಪಿಸಿದೆ.
ನಾನು ಮತ್ತು ನನ್ನ ಗೆಳೆಯ-ಗೆಳತಿಯರು ಕೂಡಿ ಮುದಿ ಕುದುರೆಗಳ ಆರೈಕೆಗಾಗಿ ಚಂದಾ ಕೂಡಿಸಿದೆವು. ನಿಸರ್ಗ ಸುತ್ತಾಡಿದೆವು. ನಮ್ಮ ಸಾಹಸದ ಬಗ್ಗೆ ಬರೆದೆವು.. (ಕನಿಷ್ಟ ನಾನಾದರೂ ಬರೆಯುತ್ತಿದ್ದೆ.)
ಈ ಕ್ಲಬ್ಬಿನ ಸನ್ಮಾನಿತ ಸದಸ್ಸರಾಗಬೇಕಾದರೆಃ

ಹತ್ತು ಜಾತಿಯ ನಾಯಿಗಳನ್ನು ಗುರುತಿಸಬೇಕು
ಹತ್ತು ಪಕ್ಷಿಗಳು ಹತ್ತು ಗಿಡಗಳು
ಐದು ರೀತಿಯ ಚಿಟ್ಟೆಗಳು
ನನ್ನದೇ ಮೊದಲನೇ ಕ್ರಮಾಂಕ.
ನಾನು ಎಲ್ಲ ಹೆಸರುಗಳನ್ನು ಹೇಳುತ್ತಿದ್ದೆ.
ನಾವೆಲ್ಲ ಒಂದೊಂದು ಪ್ರಾಣಿಗಳ ಹೆಸರನ್ನು ಇಟ್ಟುಕೊಂಡಿದ್ದೆವು.
ಜೇನ್, ಚಿಟ್ಟೆಯ ಹೆಸರಿನ ರೆಡ್ ಅಡ್ಮಿರಲ್ ಆಗಿದ್ದಳು.

ಶಾಲೆಗಳಿದ್ದ ದಿನ ಶಾಲೆಗೆ ಹೋಗಲು ನನಗೆ ಬೇಜಾರಾಗುತ್ತಿತ್ತು. ಕ್ಲಾಸಿನ ನಾಲ್ಕು ಗೋಡೆಗಳ ಒಳಗೆ ಕೂಡುವದು ಸೇರುತ್ತಿರಲಿಲ್ಲ.
ಆದರೆ ಶಾಲೆ-ಮನೆ ಬಿಟ್ಟು ಹೊರಬಿದ್ದರೆ ಇಲ್ಲವೆ ಸುತ್ತಮುತ್ತ ಪ್ರಾಣಿಗಳಿದ್ದರೆ ನನಗೆ ಬಹು ಹುರುಪು.

ನಾನು ಎಷ್ಟು ಪ್ರಾಣಿಗಳನ್ನು ಸಾಕಿದ್ದೆ ಎಂಬುದನ್ನು ಊಹಿಸಬಲ್ಲಿರಾ?
ಆಯವ್ವರ, ಕಾಲಿಲ್ಲದ ಹಲ್ಲಿ.
ಗಾಂಧಿ ಮತ್ತು ಜಿಮ್ಮಿ ಹೆಸರಿನ ಹಂದಿಮರಿಗಳು
ಪಂದ್ಯದ ಓಟಕ್ಕೆ ಅಣಿಯಾಗಿದ್ದ ಕ್ರಮಾಂಕಗಳನ್ನು ಬರೆದ ಬಸವನಹುಳಗಳು
ಪಿಕಲ್ ಹೆಸರಿನ ಬೆಕ್ಕು
ಹ್ಯಾಮಲೆಟ್ ಹೆಸರಿನ ಹ್ಯಾಮಸ್ಟರ್
ಪೀಟರ ಹೆಸರಿನ ಕ್ಯಾನರಿ
ಇವಲ್ಲದೆ ಎಷ್ಟೋ ನಾಯಿಗಳು ಅದರಲ್ಲಿಯೂ ಪಾಯಜಮಾ ಹಾಕಿಕೊಂಡ ರಸ್ಸಿ.
ಬೊಗಳು
ಓಹ್!... ಅದಕ್ಕೆ ಪಾಯಜಮಾ ಸೇರುತ್ತಿರಬಹುದು.

ನನಗೆ ಪ್ರಾಣಿಗಳ ಬಗ್ಗೆ ಇನ್ನಷ್ಟು ಕಲಿಯಲು ಆಸ್ಪದ ಕೊಡುವ ಕೆಲಸ ಬೇಕಿತ್ತು. ಆದರೆ ಆ ಕಾಲದಲ್ಲಿ ಹೆಣ್ಣು ಮಕ್ಕಳು ಸಂಶೋಧಕರಾದದ್ದನ್ನು ಯಾರೂ ಕೇಳಿರಲಿಲ್ಲ. ಆವರಿಗೆ ನರ್ಸ್, ಟಾಯಪಿಸ್ಟ ಇಲ್ಲವೆ ಶಿಕ್ಷಿಕೆ ಇಂತಹ ಕೆಲಸ ಮಾಡುವ ಹೆಣ್ಣು ಮಕ್ಕಳ ಪರಿಚಯ.

ನನಗೆ ಆಫ್ರಿಕಾಕ್ಕೆ ಹೋಗಬೇಕಾಗಿತ್ತು.
ಪ್ರಾಣಿಗಳ ಅಭ್ಯಾಸ ಮಾಡಬೇಕಾಗಿತ್ತು.
ನನ್ನ ತಾಯಿ ಹೇಳುತ್ತಿದ್ದಳುಃ

"ನಿನಗೆ ನಿಜವಾಗಿಯೂ ಅದು ಬೇಕಿದ್ದರೆ ಬಹಳ ಕಷ್ಟ ಪಡಬೇಕು."

ನಿನ್ನ ನಿಶ್ಚಯ ದೃಢವಾಗಿದ್ದರೆ ಅದು ನಿನಗೆ ನಿಶ್ಚಿತವಾಗಿ ದೊರೆಯುತ್ತದೆ.

ನಾನು ಈ ಮಾತುಗಳನ್ನು ಎಂದಿಗೂ ಮರೆಯಲಿಲ್ಲ.
ನನಗೆ ಅಂತಹ ಒಂದು ಸಂಧಿ ದೊರಕಿತು.
ನನ್ನ ಒಬ್ಬಗೆಳತಿ ನನ್ನನ್ನು ಕೆನಿಯಾದಲ್ಲಿರುವ ಅವರ ಕುಟುಂಬಕ್ಕೆ ಭೆಟ್ಟಿ ಕೊಡಲು ಆಮಂತ್ರಿಸಿದಳು




ಅಲ್ಲಿಯವರೆಗಿನ ಪ್ರವಾಸಕ್ಕಾಗಿ ಬೇಕಾಗುವ ಖರ್ಚಿಗಾಗಿ ನಾನು ಹೋಟಲ್ಲಿನಲ್ಲಿ ದಿನವಿಡೀ ದುಡಿಯತೊಡಗಿದೆ. ಬಂದ ಹಣವನ್ನು ಹಾಸಿಗೆಯ ಕೆಳಗೆ ಶೇಖರಿಸುತ್ತಿದ್ದೆ. ಒಂದು ದಿನ ಹಣವನ್ನು ಎಣಿಸಿದೆ.
ಮತ್ತೇ....



ಹಡಗಿನಿಂದ ಮಾಡಿದ ಈ ಪ್ರಯಾಣ 21 ದಿವಸ ತೆಗೆದುಕೊಂಡಿತು.



ನಾನೀಗ 23 ವರುಷದವಳು.



ನನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡುವ ಜಿರಾಫ ಕಾಣುವವರೆಗೆ ಇದೆಲ್ಲ ಒಂದು ಕನಸೆಂದು ಅನ್ನಿಸಿತು. ಅದರ ಕಪ್ಪು ಕಣ್ಣುಗಳು, ಗಡದ್ದಾದ ಹುಬ್ಬುಗಳು, ಅದರ ಕಪ್ಪು ನಾಲಿಗೆ. ಅದು ಅಕೆಶಿಯಾದ ಮುಳ್ಳುಗಳನ್ನು ತಿನ್ನುತ್ತಿತ್ತು.

ನನ್ನ ಕನಸು ನನಸಾಗುತ್ತಿದೆ. ನಾನು ಡಾ. ಡುಲಿಟಲ್ ಇವರ ಆಫ್ರಿಕಾಕ್ಕೆ ಬಂದು ತಲುಪಿದೆ.

ಎರಡು ತಿಂಗಳ ನಂತರ ನನ್ನ ಜೀವನ ಮತ್ತೊಮ್ಮೆ ಬದಲಾಯಿಸಿತು.
ಯಾರೋ “ನಿನಗೆ ಪ್ರಾಣಿಗಳ ಬಗ್ಗೆ ಹಂಬಲವಿದ್ದರೆ ಇವರನ್ನು ಭೆಟ್ಟಿಯಾಗಬೇಕು.” ಎಂದು ಹೇಳಿದರು. ಇವರು ಎಂದರೆ




ಡಾಕ್ಟರ ಲೀಕಿ ಮಾನವವಂಶಶಾಸ್ತ್ರಜ್ಞರು ಅದರ ಜೊತೆಗೆನೇ ಪಳೆಯುಳಿಕೆ ಮತ್ತು ಎಲುವುಗಳನ್ನು ಅಭ್ಯಸಿಸುವ ವಂಶಶಾಸ್ತ್ರಜ್ಞರು. ಅವರು ನನ್ನನ್ನು ಮೊದಲು ಸೆಕ್ರೆಟರಿಯ ಕೆಲಸಕ್ಕೆ ನೇಮಿಸಿದರು.
ಪ್ರಾಣಿಗಳ ಬಗ್ಗೆ ಇರುವ ನನ್ನ ಪ್ರೀತಿ ಮತ್ತು ಅವರ ಸಾಕುಪ್ರಾಣಿಗಳ ಬಗೆಗಿನ ಒಲವು ಕಂಡು ಕೆಲವೇ ದಿನಗಳಲ್ಲಿ ಅವರಿಗೆ ನನ್ನ ಕೆಲಸ ಬಹಳ ಹಿಡಿಸಿತು.

ಚಿಂಪಾಂಝಿಯ ಬಗ್ಗೆ ಆಳವಾಗಿ ಅಭ್ಯಸಿಸುವ ಒಂದು ಕೆಲಸವಿದೆ ಎಂದು ಡಾಕ್ಟರ ಲೀಕಿ ಮತ್ತೊಂದು ದಿನ ಹೇಳಿದರು. ಇದಕ್ಕಾಗಿ ಅರಣ್ಯದಲ್ಲಿಯೇ ವಾಸಿಸಬೇಕು ಹಾಗು ಅದು ಬಹು ಕಷ್ಟದ ಮತ್ತು ಅಪಾಯದ ಕೆಲಸ ಎಂದು ನನಗೆ ಮುನ್ನೆಚ್ಚರಿಕೆ ಕೊಟ್ಟರು.
ಆದರೆ ಚಿಂಪಾಂಝಿಗಳು ಹೇಗೆ ಜೀವಿಸುತ್ತವೆ ಎಂಬುದನ್ನು ನಾವು ಈಗ ಕಂಡು ಹಿಡಿದರೆ ಇತಿಹಾಸಪೂರ್ವ ಕಾಲದಲ್ಲಿದ್ದ ನಮ್ಮ ಪೂರ್ವಜರು ಹೇಗೆ ಜೀವಿಸುತ್ತಿದ್ದರು ಎಂಬುದನ್ನು ಕಂಡು ಹಿಡಿಯಬಹುದು.



ಇಡೀ ಒಂದು ವರುಷ ನಾನು ಚಿಂಪಾಂಝಿಯ ಎಲ್ಲ ವಿವರಗಳನ್ನು ಕೂಲಂಕುಶವಾಗಿ ಅಭ್ಯಸಿಸಿದೆ

.

ಪ್ರತ್ಯಕ್ಷ ಅರಣ್ಯದಲ್ಲಿ ಒಳಹೊಕ್ಕು ಅವುಗಳನ್ನು ಯಾರೂ ಅಭ್ಯಸಿಸಿರಲಿಲ್ಲ.

ಈ ಮೊದಲಿನ ಇದರ ಬಗೆಗಿನ ಎಲ್ಲ ವಿವರಗಳು ಪ್ರಯೋಗಶಾಲೆಯಲ್ಲಿ ಕುಳಿತು ಮಾಡಿದ ವಿವರಗಳಾಗಿದ್ದವು

ಒಬ್ಬಳೇ ಹೆಂಗಸು ಅಡವಿಯಲ್ಲಿ ಇರಕೂಡದು ಎಂದು ಯಾರೋ ಹೇಳಿದರು.
ನನ್ನ ಜೊತೆ ಓರ್ವ ಮಾರ್ಗದರ್ಶಿ ಇಲ್ಲವೆ ಸಹಕಾರಿ ಇರಭೇಕು, ಎಂದು ಹೇಳಿದರು.
ನನ್ನ ತಾಯಿ ನನ್ನ ಜೊತೆ ಇರುತ್ತೇನೆ ಎಂದು ಹೇಳಿದಳು.
ನಾನು ತಯಾರಾದೆ.

ನೀನು ಹಿಂಜರಿಯುವದಿಲ್ಲ ಎಂಬುದರ ಬಗ್ಗೆ ನನಗೆ ಖಾತ್ರಿ ಇತ್ತು.

.

ನಾನು 16 ಜುಲೈ, 1960 ಈ ದಿನ ಎಂದಿಗೂ ಮರೆಯಲಾರೆ. ನಾನು ಟಾಂಝಾನಿಯಾದಲ್ಲಿಯ ಗೋಂಬೆ ರಾಷ್ಟ್ರೀಯ ಉದ್ಯಾನದಲ್ಲಿ ಮೊದಲು ಸಲ ಕಾಲಿಟ್ಟ ದಿನ.

ಇಪ್ಪತ್ತಾರನೇ ವಯಸ್ಸಿನಲ್ಲಿ ಕೊನೆಗೆ ನಾನು ಚಿಂಪಾಂಝಿಯ ಮನೆಯನ್ನೇ ನನ್ನ ಮನೆಯಾಗಿ ಮಾಡಿದೆ.



ನನ್ನ ಸಂಶೋಧನೆಯ ಕಾಲದಲ್ಲಿ ನಾವು ಎರಡು ಚಿಂಪಾಂಝಿಗಳು ಒಂದು ಎತ್ತರದ ಗಿಡವನ್ನು ತಿನ್ನುತ್ತಿರುವದನ್ನು ನೋಡಿದೆವು. ಅವು ನಮ್ಮನ್ನು ಕಂಡು ಓಡಿ ಹೋದವು.
ನಮಗೆ ಹೆದರಿರಬಹುದು.



ಮರುದಿನ ಅವು ನಮಗೆ ಕಾಣಲಿಲ್ಲ.



ಅದರ ಮಾರನೆ ದಿನ ಕೂಡ ಅವು ಕಾಣಲಿಲ್ಲ.



ಎಷ್ಟೋ ತಿಂಗಳು ನಾನು ಅವುಗಳ ಸಮೀಪ ಹೋಗಲು ಹವಣಿಸುತ್ತಿದ್ದೆ. ಆದರೆ ಅವು ಯಾವಾಗಲೂ ಓಡಿ ಹೋಗುತ್ತಿದ್ದವು.
ಆ ಮೇಲೆ ನಾನು ಒಬ್ಬಳೇ ಹೋಗಹತ್ತಿದೆ.
ಕೇವಲ ನಾನು.
ನಾನು ಪೀಕ ಎಂಬ ಎತ್ತರದ ಸ್ಥಳಕ್ಕೆ ಹೋಗಿ ಅಡ್ಡ ಬಿದ್ದು ಬೈನಾಕ್ಯುಲರ್ಸದಲ್ಲಿಂದ ನೋಡತೊಡಗಿದೆ.




ದಿನ ಕಳೆದಂತೆ ಆರು ಇಲ್ಲವೆ ಅದಕ್ಕೂ ಕಡಿಮೆ ಸಂಖ್ಯೆಯಲ್ಲಿರುವ ಚಿಂಪಾಂಝಿಗಳ ಗುಂಪು ಕಾಣತೊಡಗಿತು.
ಹೆಣ್ಣು ಚಿಂಪಾಂಝಿ ತನ್ನ ಮಕ್ಕಳ ಜೊತೆ ಇರುತ್ತಿತ್ತು. ಗಂಡು ಚಿಂಪಗಳು ಬೇರೆ ಗುಂಪಿನಲ್ಲಿ ಇರುತ್ತಿದ್ದವು.
ಇವು ಕೇವಲ ಗುಂಪುಗಳಾಗಿರಲಿಲ್ಲ.
ಅವು ಕುಟುಂಬಗಳು.



ಅವುಗಳ ತೀರ ಹತ್ತಿರ ಹೋಗಲು ನನಗೆ ಸುಮಾರು ಒಂದು ವರುಷ ಹಿಡಿಯಿತು.
ನಾನು ಒಂದು ದಿನ ನನ್ನ ಕ್ಯಾಂಪಿಗೆ ತಿರುಗಿ ಬಂದು ನೋಡುತ್ತೇನೆಃ




ಮರುದಿನ ನಾನು ದಾರಿ ಕಾಯುತ್ತಿದ್ದೆ ಅವು ಎಲ್ಲಿಯೂ ಕಾಣಲಿಲ್ಲ.




ಮುಖದ ಮೇಲೆ ಗಡ್ಡವಿರುವ ದೊಡ್ಡ ಗಾತ್ರದ ಒಂದು ಚಿಂಪ ಬಂದಿತ್ತು.




ನಾನು ಅದಕ್ಕೆ ಕೊಟ್ಟ ಹೆಸರು.
ಇದಕ್ಕೂ ಮೊದಲು ಪ್ರಾಣಿಗಳ ಅಭ್ಯಾಸ ಮಾಡುವ ಒಂದು ವಿಶಿಷ್ಟ ರೀತಿ ಇದೆ – ಅಲ್ಲಿ ಚಿಂಪಾಂಝಿಗಳನ್ನು ಹೆಸರುಗೊಂಡು ಕರೆಯಬಾರದು.
ಅವುಗಳಿಗೆ ಹೆಸರಿನ ಬದಲು ಕ್ರಮಾಂಕ ಕೊಟ್ಟು ಗುರುತಿಸಬೇಕು, ಎಂದು ಹೇಳಿದ್ದರು.
ಹೀಗೇಕೆ?
ಇದಕ್ಕಾಗಿ ಪ್ರಾಣಿಗಳಿಗೆ ಮನುಷ್ಯರಂತೆ ಭಾವನೆಗಳಿರುವದಿಲ್ಲ ಎಂಬ ಕಾರಣ ಕೊಡುತ್ತಿದ್ದರು.
ಅವುಗಳನ್ನು ಹೆಸರಿನಿಂದ ಕರೆದರೆ ಅವು ಕೂಡ ನಮ್ಮಂತೆ ಎಂದು ಪರಿಗಣಿಸಬೇಕಾಗುವದು.

ಇದೇ ಇನ್ನುವರೆಗೂ ಯಾರಿಗೂ ತಿಳಿದಿರಲಿಲ್ಲ. ಅವು ನಮ್ಮಂತೆಯೇ. ಆ ದಿನ ಡೇವ್ವಿಡ್ ಗ್ರೇಬರ್ಡ ನನ್ನ ಕಾಳುಗಳನ್ನು ತೆಗೆದುಕೊಂಡಿತ್ತು. ನನ್ನ ಬಾಳೆಹಣ್ಣುಗಳನ್ನು ತೆಗೆದುಕೊಂಡಿತ್ತು.







ಮುಂದೊಂದು ತಿಂಗಳಿನ ನಂತರ ಅದು ನನ್ನ ಅಂಗೈಯಲ್ಲಿಂದ ತೆಗೆದುಕೊಳ್ಳತೊಡಗಿತು!



ಆ ಮೇಲೆ ಕೂಡ ನಾನು ಅಡವಿಯಲ್ಲಿ ತಿರುಗಾಡುತ್ತಿದ್ದಾಗ ನನ್ನ ಕಡೆ ನಿದಾನವಾಗಿ ಬಂದು ಕಿಸೆಯಲ್ಲಿ ಏನಾದರೂ ತಿನ್ನಲು ಇದೆಯೇ ಎಂಬುದರ ತನಿಖೆ ಮಾಡುತ್ತಿತ್ತು.
ಅದು ನನಗಾಗಿ ಒಂದು ಗರ್ವದ ಕ್ಷಣ.
ಉಳಿದ ಚಿಂಪಾಂಝಿಗಳು ನನಗೆ ಹೆದರುವದಿಲ್ಲ.






ದಿನ ಕಳೆದಂತೆ ಚಿಂಪಾಂಝಿಗಳಿಗೆ ಸ್ವತಂತ್ರ ವ್ಯಕ್ತಿಮತ್ವ ಇದೆ ಎಂಬುದನ್ನು ನಾನು ಮನಗಂಡೆ.




ಡೇವ್ಹಿಡ್ ಶಾತನಾಗುತ್ತಿದ್ದ, ಅವನಿಗೆ ಬೇಕಿದ್ದನ್ನು ಕೊಟ್ಟಮೇಲೆಯೇ...




ಗೋಲಿಯಥ್ ಸುಲಭವಾಗಿ ಉತ್ತೇಜಿತನಾಗುತ್ತಿದ್ದ.



ವಿಲಿಯಮ್ ನಾಚುಬುರುಕ.



ಮುದುಕಿ ಫ್ಲೋ ಗಟ್ಟಿ ಹೆಂಗಸು. ಯಾವಾಗಲು ತನ್ನ ಮಗ ಮತ್ತು ಮಗಳ ಜೊತೆ ಬರುತ್ತಿದ್ದಳು.

ನಾನು ಗಮನಿಸುತ್ತಿದ್ದಂತೆ ಒಂದು ದಿನ ಬಹು ಅಚ್ಚರಿ ಎನ್ನಿಸುವ ಸಂಗತಿ ತಿಳಿಯಿತು., ಡೇವ್ಹಿಡ್ ಗ್ರೇಬರ್ಡ ಗಿಡದ ಟೊಂಗೆಯ ಎಲೆಗಳನ್ನು ಬೀಸಾಕಿ ಆ ಕಟ್ಟಿಗೆಯ ತುಣುಕನ್ನು ಹುಳಗಳಿರುವಲ್ಲಿ ತುರುಕಿ ಹುಳಗಳು ಅಂಟಿಕೊಳ್ಳುವ ಹಾಗೆ ಹಾಗೆ ಮಾಡುತ್ತಿದ್ದ.





ಕಟ್ಟಿಗೆಯ ತುಂಡನ್ನು ಕೇವಲ ಸಲಕರಣೆಯಂತೆ ಉಪಯೋಗಿಸದೆ ಸಲಕರಣೆಯನ್ನು ಮಾಡುವಷ್ಟು ಜಾಣತನ ಅವನಲ್ಲಿ ಇತ್ತು.

ಈ ಮೊದಲು ವೈಜ್ಞಾನಿಕರೆಲ್ಲ ಕೇವಲ ಮನುಷ್ಯರೇ ಸಲಕರಣೆ ಶೋಧಿಸುವ ಪ್ರಾಣಿ ಎಂದು ತಿಳಿದಿದ್ದರು. ಆದರೆ ಈಗ ಪ್ರಾಣಿಗಳಿಗೂ ಬುದ್ಧಿ ಇದೆ ಎಂಬುದು ಖಚಿತವಾಯಿತು.

ಪ್ರತಿ ರಾತ್ರಿ ನಾನು ನನ್ನ ದಿನಚರಿ ಪುಸ್ತಕದಲ್ಲಿ ಇಡೀ ದಿನದ ಆಗುಹೋಗುಗಳನ್ನು ನಮೂದಿಸುತ್ತಿದ್ದೆ. ಪ್ರತಿದಿನ ಚಿಂಪಾಂಝಿಗಳು ನಾವು ಮಾಡುವ ಎಲ್ಲ ಕೆಲಸಗಳನ್ನು ಮಾಡುತ್ತಿದ್ದವು ಎಂಬುದು ನನಗೆ ಕಂಡು ಬಂದಿತುಃ



ಕೈ ಹಿಡಿಯುವದು



ಕಟ್ಟ್ಯಾಡಿಸುವದು



ಮುದ್ದು ಕೊಡುವದು



ಅಷ್ಟೇ ಅಲ್ಲ, ಬೆನ್ನಿನ ಮೇಲೆ ಚಪ್ಪರಿಸಿ ಭರವಸೆ ಕೊಡುವದು

ನಾನು ಅವಲೋಕಿಸಿದಷ್ಟು ಅವುಗಳ ಬಗ್ಗೆ ಹೆಚ್ಚೆಚ್ಚು ಕಲಿಯತೊಡಗಿದೆ.

ನನ್ನ ಹತ್ತಿ ಈಗ ಸಾಕಷ್ಟು ವಿವರಗಳಿದ್ದವು. ಅದಕ್ಕಾಗಿ ಟೇಪರೆಕಾರ್ಡರ್ ಬೇಕಿತ್ತು.

ನನಗೆ ಒಬ್ಬ ಸಹಾಯಕ ಬೇಕಿತ್ತು. ಈ ಸಹಾಯಕ ಅಡವಿಯಲ್ಲಿದ್ದ ಉಳಿದ ಚಿಂಪಾಂಝಿ ಕುಟುಂಬಗಳ ವಿವರಗಳನ್ನು ಸಂಗ್ರಹಿಸಬೇಕಿತ್ತು.




ಟಾಂಝಾನಿಯಾದಲ್ಲಿಯ ಆ ನಮ್ಮ ಕೆಲಸದಿಂದಾಗಿ ಇಡೀ ಜಗತ್ತಿಗೇನೆ ಪ್ರಾಣಿಗಳಿಗೆ ತಮ್ಮದೇ ಆದ ಒಂದು ವ್ಯಕ್ತಿಮತ್ವ, ಅವುಗಳದೇ ಆದ ಜಟಿಲವೆನ್ನಿಸುವ ನಂಟುತನವಿರುತ್ತದೆ ಎಂಬುದು ಗೊತ್ತಾಯಿತು.

ನನ್ನ ಆಯುಷ್ಯದಲ್ಲಿ ಜನ ಹೇಳುತ್ತಿದ್ದರುಃ
ಏನಾದರೂ ಮಾಡಲು ‘ನಿರ್ದಿಷ್ಟವಾದ ಮಾರ್ಗ’ ಇರುತ್ತದೆ,
ಪ್ರಾಣಿಗಳ ಅಭ್ಯಾಸಕ್ಕಾಗಿ ‘ನಿರ್ದಿಷ್ಟವಾದ ಮಾರ್ಗ’,
ಹೆಣ್ಣುಮಕ್ಕಳ ಆಚರಣೆಗಾಗಿ ‘ನಿರ್ದಿಷ್ಟವಾದ ಮಾರ್ಗ’,
ನನಗೆ ಈ ನಿಯಮಗಳನ್ನು ಪಾಲಿಸಲು ಹೇಳುತ್ತಿದ್ದರು.
ನಾನು ಮಾತ್ರ ನನ್ನ ಅಂತಃಶಕ್ತಿಯನ್ನು ನಂಬಿದ್ದೆ.



ನಿಮ್ಮ ಆಯುಷ್ಯದಲ್ಲಿ ಉಳಿದವರು ನಿಮಗಿಂತ ಹೇಗೆ ಬೇರೆ ಇದ್ದಾರೆ ಎಂಬುದನ್ನು ಕಾಣುವದು ಬಹು ಸುಲಭ.
ಆದರೆ ಅವರು ನಮ್ಮನ್ನು ಎಷ್ಟು ಹೋಲುತ್ತಾರೆ ಎಂಬುದನ್ನು ಕಂಡರೆ ನಾವು ಸಾಕಷ್ಟು ಗಳಿಸಬಹುದು.
ನಾವು- ನಮ್ಮ ಸುತ್ತಮುತ್ತಲಿನ ಪ್ರಾಣಿಗಳು – ಅದೆಷ್ಟೋ ವಿಷಯಗಳಲ್ಲಿ ಪಾಲುಗಾರರಾಗಿದ್ದೇವೆ.
ನಮ್ಮ ನಡುವೆ ಸಾಕಷ್ಟು ಸಮಾನುದ್ದೇಶಗಳಿವೆ.
ಇದು ಗೊತ್ತಾದಾಗ ನಾವು ಒಬ್ಬರಿಗೊಬ್ಬರನ್ನು ನೋಡುವ ದೃಷ್ಟಿಯೇ ಬದಲಾಗುತ್ತದೆ.





ಇದೇ ನಾವೆಲ್ಲರು ಕೂಡಿ ಒಳ್ಳೆಯ , ಸುಂದರವಾದ ಜೀವನ ನಡೆಸುವ ಬಗೆ.
ಇಂದು ಡಾ. ಗುಡಾಲ್ ರ ಕೆಲಸ ಬೃಹತ್ತಾಕಾರವನ್ನು ಹೊಂದಿದೆ. ಎಲ್ಲರಿಗೂ ಈ ಪೃಥ್ವಿಯನ್ನು ಕಾಪಾಡಬೇಕಾದರೆ ಪರಸ್ಪರ ಸಹಾಯದಿಂದಲೆ ಸಾಧ್ಯ ಎಂಬ ಅರಿವು ಮೂಡಿದೆ.
ಪೃಥ್ವಿಯನ್ನು ರಕ್ಷಸಿದರೆ ನಮ್ಮ ರಕ್ಷಣೆಯಾಗುತ್ತದೆ.
ಇಂದಿಗೂ ಕೂಡ ಜೇನ್ ಗುಡಾಲ್ ಇನ್ಸ್ಟಿಟ್ಯೂಟ ಜೊತೆ ಅವರು ನಶಿಸಿ ಹೋಗುತ್ತಿರುವ ಪ್ರಾಣಿಜಾತಿಗಳ ಮತ್ತು ಪರಿಸರದ ರಕ್ಷಣೆಗಾಗಿ ದುಡಿಯುತ್ತಿದ್ದಾರೆ.
130ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಒಂದು ಒರೆ ಲಕ್ಷಕ್ಕೂ ಮೀರಿದ ರೂಟ್ಸ್ ಮತ್ತು ಶೂಟ್ಸ್ ದ ಜಗತ್ತಿನಲ್ಲಿಯ ಎಲ್ಲ ವಯಸ್ಸಿನವರ ನೆಟವರ್ಕ್ ಈ ಪೃಥ್ವಿ ಉಳಿಸಲು ಪ್ರಯತ್ನಿಸುತ್ತಲಿದೆ.
ಒಂದು ಕರೆ ಕೊಟ್ಟು ನೀವು ಕೂಡ ಈ ಪೃಥ್ವಿಯನ್ನು ಉಳಿಸಬಹುದು.
ತಾವು ಪ್ರಾಣಿಗಳ ಜೊತೆ ಕೆಲಸ ಮಾಡಲು ಬಯಸುತ್ತಿರಾ?
ನಿಮ್ಮ ನೆಚ್ಚಿನ ಪ್ರಾಣಿಗಳ ಕಡೆ ಲಕ್ಷ ಕೊಡಿ.
ನೋಟ್ಸ ಬರೆಯಿರಿ. ಪುಸ್ತಕ ಓದಿ.
ಅವು ನಮ್ಮಂತೆಯೇ ಇವೆ, ಎಂಬುದನ್ನು ಕಾಣಿರಿ.



ನಾನು ಜೇನ್ ಗುಡಾಲ್ ನಮ್ಮೆಲ್ಲರನ್ನು
ಜೋಡಿಸುವಂತಹದು ಏನಾದರೂ ಇದೆ.
ಗಮನ ಕೊಡಿ, ನೀರಿಕ್ಷಿಸಿ, ತಾಳ್ಮೆ ಇರಲಿ. ನಾನು ನಿಮಗೆ
ಒಂದು ಮಾತು ಹೇಳಬಯಸುತ್ತೇನೆಃ
ಈ ಪೃಥ್ವಿಯು ನಮ್ಮ ಸ್ವತ್ತಲ್ಲ, ನಾವೆಲ್ಲರೂ  ಅದರ
ಪಾಲುಗಾರರು.

ನಿಮ್ಮ ಕರುಳಿನ ಕರೆಯನ್ನು ಕೇಳಿ.
ನಮ್ಮ ಸುತ್ತಲು ಮುತ್ತಲಿನ ಪ್ರಾಣಿಗಳ ಹೊಣೆ ನಮ್ಮ ಮೇಲಿದೆ.
ನಾವು ಅವುಗಳ ಆರೈಕೆ ಮಾಡಬೇಕು. ನಮ್ಮಲ್ಲಿ ಯಾರಾದರೂ
ಸಂಕಟದಲ್ಲಿದ್ದರೆ – ಮನುಷ್ಯರಿರಲಿ ಇಲ್ಲವೆ ಯಾವದೇ ಪ್ರಾಣಿ
ಇರಲಿ – ನಾವು ಅವರಿಗೆ ಸಹಾಯ ಮಾಡಬೇಕು, ಅವರನ್ನು
ಸಂಕಟದಿಂದ ಪಾರು ಮಾಡಬೇಕು.
ನಾವು ಹೀಗೆ ಮಾಡಿದರೆ ಅದೇ ಒಂದು ಸೇತುವೆ...
ಆ ಸೇತುವೆ ನಮ್ಮನ್ನು ಆ ಬದಿಗೆ ಮುಟ್ಟಿಸುವದು.





ಜೇನ್ ಡೇವ್ಹಿಡ್ ಗ್ರೇಬರ್ಡ ಜೊತೆ
(1960)



ಜೇನ್ ಜುಬಿಲಿಯ ಜೊತೆ





ಜೇನ್ ಡಾ.ಲೀಕಿಯ ಜೊತೆ



ಜೇನ್ ರೂಟ್ಸ್ ಮತ್ತು ಶೂಟ್ಸ್ ಸದಸ್ಯರ ಜೊತೆ

ನೀವು ನಿಮ್ಮ ಪ್ರಭಾವ ಬೀರದೆ ಒಂದು ದಿನ ಕೂಡ ಕಳೆಯಲಾರಿರಿ. ನೀವು ಏನೆ ಮಾಡಿದರೂ ಅದರ ಪರಿಣಾಮವಾಗುತ್ತ ಇರುತ್ತದೆ. ಆದ್ದರಿಂದ ನೀವು ಯಾವ ರೀತಿಯ ಬದಲಾವಣೆ ಮಾಡುವವರಿದ್ದಿರಿ ಎಂಬುದರ ನಿರ್ಣಯವನ್ನು ನೀವೇ ತೆಗೆದುಕೊಳ್ಳಬೇಕಾಗಿದೆ.

- ಜೇನ್ ಗುಡಾಲ್